# ಕಾನನ

FEBRUARY 2013

ನಿಸರ್ಗದೆಡೆಗೆ ಪಯಣ

## ಲೇಖನಗಳು

* ಬೆಂಗಳೂರಿನಲ್ಲಿ ಕಳೆದು ಹೋದ ಸಿಂಹ
* ಹಕ್ಕಿಲೋಕ
* ಮುತ್ತುಗ
* ವಿದ್ಯಾರ್ಥಿಗಾಗಿ ವಿಜ್ಞಾನ
* ನಾ (ಕವನ)


ಸಂಪಾದಕ : ಅಶ್ವಥ ಕೆ.ಎನ್

ವಿನ್ಯಾಸ : ಕೃಷ್ಣ ಎಸ್

ಲೇಖಕ ವೃಂದ : ಶಂಕರಪ್ಪ ಕೆ.ಪಿ,
ಅಶ್ವಥ ಕೆ.ಎನ್,
ಶೃತಿ ಎಸ್.

ಛಾಯಾಚಿತ್ರ : ದೀಪಕ್ ಜಿ.ಎನ್.

ಕರಡುತಿದ್ದುಪಡಿ: ಮುರಳಿ ಎಸ್.




E-mail: kaanana.mag@gmail.com



# ಸಂಪಾದಕೀಯ

ಫೆಬ್ರವರಿ ಅಂತ್ಯ, ಬೇಸಿಗೆಯ ಆರಂಭದ ಅಗಮನವನ್ನು ಸೂಚಿಸುತ್ತದೆ. ಕಾಡುಗಳಿಗೆ ಎಲ್ಲೆಂದರಲ್ಲಿ ಬೆಂಕಿ ಬೀಳುವ ಸಮಯ. . . !, ಕಾಡಿಗೆ ಬೆಂಕಿ ಬೀಳುವುದರಿಂದ ಅಪಾರ ಸಂಪತ್ತು ನಾಶವಾಗುತ್ತದೆ. ಈಗ ಕಾಡಿನ ಸಕಲ ಮರಗಳೆಲ್ಲ ಎಲೆಯುದುರಿಸಿ ಹುಲ್ಲೆಲ್ಲಾ ಒಣಗಿ ಬೋಳಾಗಿ ನಿಂತಿರುವ ಅರಣ್ಯಕ್ಕೆ ಅಲ್ಪ ಆಸೆಗಾಗಿ, ಕಾಡಿಗೆ ಬೆಂಕಿಯಿಟ್ಟು ಸುಟ್ಟು ಭಸ್ಮವಾದ ಒಂದೆರಡು ದಿನಗಳಲ್ಲಿ ಹುಲ್ಲು ತನ್ನ ಬುಡದಿಂದ ಹೊಸ ಚಿಗುರೊಡೆಯುತ್ತದೆ. ದನಗಳಿಗೆ ಅಲ್ಪ-ಸ್ವಲ್ಪ ಮೇವು ಅದು. ಆದರೆ ಆ ಜಾಗದಲ್ಲಿ ಮತ್ತೆ ವರ್ಷಪೂರ್ತಿ ಹುಲ್ಲು ಬೆಳೆಯುವುದಿಲ್ಲ. ಅದು ತಿಳಿಯದ ಕಾಡಿನ ಅಕ್ಕಪಕ್ಕದ ಜನರು ಈ ಕೆಲಸಕ್ಕೆ ಕೈಹಾಕುತ್ತಾರೆ. ಕಾಡುಗಳು ನಮ್ಮೆಲರ ಬದುಕಿಗೆ ಬೇಕಾಗುವ ಅತ್ಯಮೂಲ್ಯವಾದ ಆಸ್ತಿ. ಅದನ್ನು ಉಳಿಸಿವುದು ಎಲ್ಲರ ಕರ್ತವ್ಯ ಕೂಡ! ಕಾಡನ್ನು ಉಳಿಸಿ! ಮಳೆ, ಬೆಳೆ ಎಲ್ಲವೂ ಸಂಮೃದ್ಧಿಯಾಗುವುದು.

ತೇಜಸ್ವಿರವರ ಕಲಾಸೃಷ್ಟಿಯು ಕೆ. ಪಿ. ಶಂಕರಪ್ಪನವರ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿದೆ ಎನ್ನಬಹುದು. ಅದೇ ದಾಟಿಯಲ್ಲಿ ಮೂಡಿಬಂದಿರುವ "ಬೆಂಗಳೂರಿನಲ್ಲಿ ಕಳೆದು ಹೋದ ಸಿಂಹ" ಎಂಬ ಲೇಖನ ಹೊಸದರ ಭಿನ್ನವಾದ ಮುಖ ಎಂದು ಭಾವಿಸಬಹುದು. ಹಾಗೆಯೇ ಫೆಬ್ರವರಿಯ ಪ್ರಾರಂಭದಲ್ಲಿಯೇ ಕಾಡಿನ ಅಲ್ಲಲ್ಲಿ ಬೆಂಕಿಯ ಉಂಡೆಯಂತೆ ಕಾಣುವ "ಮುತ್ತುಗ"ದ ಹೂವನ್ನು ಕುರಿತು ಮತ್ತು ವಿವಿ ಅಂಕಣದಲ್ಲಿ ನಕ್ಷತ್ರಗಳನ್ನು ದಾರಿದೀಪಗಳಂತೆ ಬಳಸುವ ಕೀಟಗಳನ್ನು ಕುರಿತ "ಸಗಣಿ ಹುಳುಕ್ಕೆ ಹಾಲುಹಾದಿಯೇ ದಿಕ್ಸೂಚಿ" ಎಂಬ ಲೇಖನವನ್ನು ಚಿತ್ರಿಸಿದ್ದಾರೆ.

ಮೇಲೇಳುತ್ತಿದ್ದ ಹೊಗೆಯ ಮೊಡದ ರಾಶಿಯಲ್ಲಿ ಕೆಂಪು ಬೆಳಕಿನ ನಡುವೆ ಕಾಜಾಣಗಳ ಬೇಟೆಯ ಪರಿ ನೋಡಲು ಮುದನೀಡಿದರೂ ಅದು ಸಹಿಸಲಾಗದ ನೋವು! ಎಷ್ಟೋ ಪ್ರಾಣಿ-ಪಕ್ಷಿಗಳು, ಹುಳ-ಹುಪ್ಪಟೆಗಳು, ಹಾವು, ಮರಿ-ಮೊಟ್ಟೆಗಳ ನಾಶ ಹೇಳತೀರದು. ಹಕ್ಕಿಲೋಕದ "ಹುಲ್ಲುಗಾವಲು" ಎಂಬ ಲೇಖನದಲ್ಲಿ ಅಶ್ವಥ. ಕೆ. ಎನ್ ರವರು ಭಾವನೆಗಳಿಗೆ ಬಣ್ಣ ನೀಡಿದ್ದಾರೆ.

ಭುವಿಯ ಮೇಲೆ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಪಾಪಕೃತ್ಯಗಳಿಂದ ಕಾವೇರುತ್ತಿರುವ ಪೃಥ್ವಿಯ ವೇದನೆಗಳನ್ನು ಶೃತಿ. ಎಂ ರವರು ತಮ್ಮ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ಕಾನನವನ್ನು http://www.issuu.com/ ನಲ್ಲಿ ಪ್ರಕಟಿಸಲಾಗುತ್ತಿದೆ. http://issuu.com/kaanana/docs ಈ ವಿಳಾಸದಲ್ಲಿ ನೀವು ಸುಲಭವಾಗಿ ಆನ್ ಲೈನ್ ನಲ್ಲೇ ಓದಬಹುದು.

ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು

ಇ-ಮೇಲ್ ವಿಳಾಸ : kaanana.mag@gmail.com

Wildlife Conservation Group



# ಬೆಂಗಳೂರಿನಲ್ಲಿ ಕಳೆದು ಹೋದ ಸಿಂಹ

ಇಡೀ ಕಾಡಿಗೆ ಕಾಡು-ರಾಜನಾದ ದೊಡ್ಡ ಮೀಸೆಯ ದೊಡ್ಡ ಸಾಹೇಬ ಪಿ .ನಂಜಪ್ಪನವರು ಇವರು . ಬಾಳಾ ಶಿಸ್ತುಬದ್ಧವಾಗಿ ತನ್ನ ಎಲ್ಲಾ ಕಿರಿ ಆಳುಗಳನ್ನ ದುಡಿಸಿದ್ದಕ್ಕೆ, ಆ ಕಿರಿ ಆಳುಗಳು ಕೋಪಗೊಂಡು, ಕೋಪವು ದ್ವೇಷವಾಗಿ ಆ ದ್ವೇಷವನ್ನು ಹುಚ್ಚಪ್ಪನ ಮೇಲೆ ನೇರವಾಗಿ ತೋರಿಸಲಾಗದೇ, ಅದು ಮಿಕ್ಕಿದಷ್ಟೂ ಒತ್ತಡ ಜಾಸ್ತಿಯಾಗಿ, ಒಂದು ದಿನ ರಾಜಪ್ಪನ ಸುಪರ್ಧಿಯಲ್ಲಿದ್ದ ಝೂನ ಮೂರು ಸಾಕಿದ ಗಡ್ಡುಲಿಗಳನ್ನಾ ಆ ಕಿರಿ ಆಳುಗಳು ಕಾಡಿಗೆ ಬಿಟ್ಟು ಬಿಟ್ಟರು!. ಆ ಕಾಡಿನ ಮಧ್ಯದಾಗ ಇರುವ ಸೊಳ್ಳೆಪುರವೆಂಬ ಆ ಊರಿಗೆ ಕೆಂಪಾಲಗನೇ ದೊರೆ. ಅವನ ಹುಲ್ಲು ಜೋಪಡಿಯ ತಡಿಕೆ ಬಾಗಿಲು ಗೆದ್ದಿಲಿಡ್ದು ಇನ್ನೇನು ಬೀಳೋ ಸ್ಥಿತಿ ತಲುಪಿದ್ದರೂ, ಆ ರಕ್ತ ಮಾಂಸದ ತಡಿಕೆಯಾದ ಕೆಂಪಲಗನು ಗುರುಗುರು ಗೂರುಲುತ್ತಾ ಏದುಸಿರು ಬಿಡುತ್ತಿದ್ದರೆ, ಆ ಜೋಪಡಿಯಾದ ಕೆಂಪಲಗನ ಮನೆಯು, ಹಲಗೆ ಏಟ್ಗೆ ಗಂಡ್ಮೈಕಳು ಗೆಜ್ಜೆಕಟ್ಟಿ ಕುಣಿದಾಂಗ ಕುಣಿತಿತ್ತು.

ಪಿಳೇಕಮ್ಮನ ಗರ್ಭಗುಡಿಯಂತೆ ಕತ್ತಲಲ್ಲಿದ್ದ ಅ ಜೋಪಡಿಯ ಒಳಗೆ, ಕೆಲವೊಮ್ಮೆ ಸೂರ್ಯ ಪರಮಾತ್ಮನ ಕಿರಣಗಳು ಬರಲೋ ಬ್ಯಾಡವೋ ಎನ್ನುವಂತೆ ಬಂದು ಬಾಗಿಲ ಸಂದಿಯಲ್ಲಿ ಮರೆಯಾಗುತ್ತಿತ್ತು. ಆ ಗೌಗತ್ತಲಲ್ಲಿ ಆ ಮೂಲೆಯ ಒಲೆಯಲ್ಲೇ ಬೈರಿ ಹೊಗೆಯೆಬ್ಬಿಸಿ, ಕೆಂಡವನ್ನು ಬೆಂಕಿಯಾಗಿಸೋ ಕೇಮೆಯಲ್ಲಿ ಕಣ್ಣೀರು ಸುರಿಸುತ್ತಾ ಕಹ್ಹಾ. . ಖಹ್ಹಾ . . ಕೆಮ್ಮುತ್ತಾ ಊದುಕೊಳವೆಗೆ ತನ್ನ ಶ್ವಾಸವನೆಲ್ಲಾ ಕೊಟ್ಟು ಕೆಂಡಕ್ಕೆ ಜೀವಬರಿಸುತ್ತಿದ್ದಳು. ಈ ಕಿರಿ ಕೆಂಡವೆಂಬುದು ಬೈರಿಯ ಶ್ವಾಸಕುಲುಮೆಯಲ್ಲಿ ನಿಗಿನಿಗಿ ಕೆಂಡವಾಗಿ, ಆ ಕೆಂಡವು ಬೆಂಕಿಯಾಗಿ, ಬೆಂಕಿಯು ಬೆಳಕಾಗಿ! ಆ ಬೆಳಕಿಗೆ ಕತ್ತಲೆಯು ದಿಗಿಲುಗೊಂಡು ಬಾಗಿಲ ಸಂದಿಯನ್ನು ಸೇರಿಕೊಂಡಿತು.

ವತ್ತಾರೆ ಬೆಳಕಾದೊಡನೆ ಎದ್ದ ಕೆಂಪಾಲಗನು, ಬೈರಿ ಕೊಟ್ಟ ಚೆಂಬು ಬಿಸಿನೀರಿನಲ್ಲೇ ಮುಖಾರವಿಂದವನ್ನು ಸಾರಿಸಿ ಗುಡಿಸಿ, ಏಳುಮಲೆ ಎಪ್ಪತ್ತೇಳುಮಲೆ ಒಡೆಯನಾದ ಅಪ್ಪಾ ಮಾದಪ್ಪನು ಹುಲಿಮೇಲೆ ಕುಳಿತಿರುವ ಪಟಕ್ಕೆ ಕೈ ಮುಗಿದು, ಈ ನನ್ನ ಮಕ್ಕಳಂಗೆ ಇರೋ "ಮೂರು ಆಡು, ನಾಲ್ಕು ಕುರಿಮರಿಗಳನ್ನ, ಗಡ್ದುಲಿ, ದೊಡ್ಬೆಕ್ಕು ,ಸೀಳ್ನಾಯಿ , ಮಟ್ಗನಿಂದ ಕಾಪಾಡ್ಬೇಕು ಸ್ವಾಮಿ." ಎಂದು ಆಕಾರವಿಲ್ಲದ ಇರುವ ನೀರನ್ನು ಕಂಚಿನ ಕಳಶಕ್ಕೆ ತುಂಬಿ ಆಕಾರಕೊಟ್ಟು ಮಡಗಿದ್ದ ಕಳಶಕ್ಕೆ ಕೈಮುಗಿದು "ಸತ್ತಮೇಲೆ ಎಲ್ಲರೂ ಭೂಮಿಗೆ,ಈ ಜನ್ಮ."ಎಂದು ವಿಭೂತಿಯನ್ನು ರಾಮಪಿತಿಕಸ್ ಸ್ಕಲ್ ನಂತಿದ್ದ ತನ್ನ ಹಣೆಗೆ ಅಡ್ಡಡ್ಡ ಮೂರ್ ಪಟ್ಟೆ ಬಳದುಕೊಂಡಾಗ, ಆ ಬಿಳಿ ಕುಳೆ ಗಡ್ಡ ಒಳಗೊಂಡ ಆ ಮುಖಕ್ಕೆ ಕಳೆಯೆಂಬುದು ಅದೆಲ್ಲೆಂದಲೋ ಚಂಗನೆ ಬರುತ್ತಿತ್ತು !.





ಝೂನಿಂದ ತಪ್ಪಿಸಿಕೊಂಡಿದ್ದ ಆ ಗಡ್ಡುಲಿಯು, ಜೇನುಕಲ್ಲಿನ ಗುಡ್ಡದ ಮೇಲೆ ಇರೋ ಕಲ್ಲುಗುಡ್ಡದ ನೆರಳಲ್ಲಿ ಮಲಗಿ ಆ ಕಡೆ ಈ ಕಡೆ ಒರಳಾಡುತ್ತಾ ತನ್ನ ನಿಗಿನಿಗಿ ಕೆಂಪಾಗಿದ್ದ ಕಣ್ಣುಗಳನ್ನು ಮುಚ್ಚಿ, ನೆರಳಿನಲ್ಲಿ ನಿದ್ರಿಸುತ್ತಿದುದ್ದನ್ನು ಸೌದೆ ತರಲು ಹೋಗಿದ್ದ ಮುನ್ನಾಲ್ಕು ಹೆಣ್ಣುಮಕ್ಕಳು ನೋಡಿದ್ದರು.

ಸಂಜೆಯಾಗುತ್ತಾ ಪಡುವಣದಲ್ಲಿ ದೂರಕ್ಕೆ ಕಾಣುವ ಘಟ್ಟಸಾಲಿನ ಸಾಲಿನಲ್ಲಿ ಜೇನುಕಲ್ಲಿನ ಹಿಂಭಾಗದಲ್ಲಿ ಸೂರ್ಯ ಸ್ವಾಮಿ ಮುಳುಗುತ್ತಿದ್ದಾಗ, ತಪ್ಪಲಿನಂತಿದ್ದ ಆ ಊರಿನ ಸಕಲ ಸೀಮೆಎಣ್ಣೆ ಬುಡ್ಡಿಗಳು ಬೆಂಕಿ ಹಚ್ಚಿಕೊಂಡು ಉರಿದಾಗ ಮಿಂಚು ಹುಳುಗಳು ಮಿನುಗುವಂತೆ ಕಾಣುತ್ತಿತ್ತು.

ಬೈರಿಯ ಮನೆಯ ಹಿಂಬಾಗಿಲಿಗೆ ಇರುವ ವಪ್ಪಾರದ ಕೊಟ್ಟಿಗೆಯಲ್ಲಿ ಕೂಡಿದ್ದ ಆಡುಕುರಿಗಳು ಸಹಾ ಕಣ್ಣು ಮುಚ್ಚಿ, ಮೆಲಕು ಹಾಕುತ್ತಿದ್ದವು. ಕೆಂಪಲಗನು ಮೋಟು ಗೋಡೆಗೆ ಒರಗಿ ಕುಳಿತಿದ್ದ. ಅವನ ಎರಡನೇ ಹೆಂಡರು ಲಚ್ಮಿ ಮಾಡುತ್ತಿದ್ದ ಸಾರು ವಗ್ರೆಣ್ಣೆಗೊಂಡು, ಆ ವಾಸನೆಯೂ ಸೀಮೆ ಬುಡ್ಡಿಯ ವಾಸನೇಯೂ ಮಿಳಿತವಾಗಿ ಕಂಪು ಎಲ್ಲೆಡೆ ಪಸರಿಸುತಿತ್ತು.

ಉಳ್ಳಳ್ಳಗಿದ್ದ ಕಲಗಚ್ಚು ನೀರನ್ನು ಆಡುಕುರಿಗೆ ಕುಡಿಸಿ ಹಟ್ಟಿಗೆ ಆನುಕೊಂಡಿಗಿದ್ದ ದೊಡ್ಡಿಗೆ ಅವುಗಳನ್ನು ಕೂಡಿ ಕಣ್ಣಕ್ಕೊರಗಿ ಕುಕ್ಕುರಗಾಲಲ್ಲಿ ಕೂತಿದ್ದನಲ್ಲಾ ಕೆಂಪಲಗನು...

ಇನ್ನೂ ಅವರಮ್ಮನೋ ನಡುಮನೆಯ ಮಧ್ಯೆ ಒಂದು ಮಕ್ಕರಿ ಅವರೆಕಾಯ ರಾಶಿಮಾಡಿ ಹಾಕಿಕೊಂಡು, ಕಿರು ಬುಡ್ಡಿ ಮಿಣಮಿಣ ಬೆಳಕಿನಲ್ಲಿ ಆ ಅವರೆಕಾಯಿ ಬೆಟ್ಟವನ್ನು ಕಾಳಾಗಿಸುತ್ತಿದ್ದಳು.ಸುತ್ತಲೂ ಕತ್ತಲಿತ್ತು .

ದೂರದಲ್ಲಿ ನಾಯಿಗಳು ಬೊಗಳುತ್ತಿದ್ದವು. ಕಾಡು ಸೇರಿಕೊಂಡ ಮೇಲೆ ಬೇಟೆ ಸಿಗದೆ ಹಸಿದಿದ್ದ ಗಡ್ಡುಲಿಯು ಕೆಂಪಲಗನ ಆಡು ಕುರಿಗಳ ಜಾಡಿಡಿದು ಜೋಪಡಿಯ ಕೊಟ್ಟಿಗೆಯ ಬಳಿ ಬಂದು ನಿಂತಿತ್ತು. ಆ ಕಳ್ಳ ಹೆಜ್ಜೆಗಳನಿಕ್ಕುತ್ತಾ ಒಂದೇ ಕೊಟ್ಟಿಗೆಯ ಮುಂದೆ ಕಟ್ಟಿದ್ದ ಕರುವಿನ ಮೇಲೆ ಬಿದ್ದು ಗ್ವಾಕೆಗೆ ಬಾಯಾಕಿ ಅಲುಮಾಕಿ ಬಿಡ್ತು. ಆಡು ಕುರಿಗಳು ಒಂದೇ ಸಮನೆ ಬ್ಯಾಗುಡುತಿದ್ದವು. ಆ ಒಂದೇ ಒಡೆತಕ್ಕೆ ತಣ್ಣಗಾದ ಕರು ಅಂಬೋ ಅನ್ನುವಷ್ಟರಾಗಾ ಆ ಮೊಬ್ಬುಗತ್ತಲಾಗ ಕುಕ್ಕರುಗಾಲಿನಲ್ಲಿ ಕುಂತಿದ್ದ ಕೆಂಪಲಗನಿಗೆ, ಕಣಜದ ಮೇಲೆ ಮಡಗಿದ್ದ ತರಳು ಮೂಟೆ ಉರಳಿ ಕರುಮೇಲೆ ಬಿದ್ದೋದಂಗೆ ಆಗಿ, ಏನೋ ಎಂದು ಗಕ್ಕನೆ ಓಡಿಹೋಗಿ ಎರಡೂ ಕೈಯಲ್ಲೂ ಕರುವಿನ ಮೇಲೆ ಬಿದ್ದಿದ್ದ ಮೂಟೆಗೆ ಕೈ ಹಾಕಿ ತಬ್ಬಿ ಎತ್ತ ತೊಡಗಿದಾಗ ಕೈಯಿಗೆ ಎರಡು ಕಿವಿಗಳು ಸಿಕ್ಕವು!. ಕರುವಿನ ಗ್ವಾಮಾಳೆ ಕಿತ್ತು ರಕುತವೆಂಬೋ ರಕುತವನ್ನ ಜೋರ್ ಎಂದು ಪಾನಮಾಡುತ್ತಿದ್ದ ಗುಡ್ಡುಲಿಗೆ ಯಾರೋ ತನ್ನ ಕಿವಿಗಳನ್ನು ಹಿಂಡಿದಂಗೆ ಭಾಸವಾಯಿತು.

ಕರುವನ ಮೇಲೆ ಕುಂತಿದ್ದು ಗಡ್ಡುಲಿಯೂ ಗಡ್ಡುಲಿಯ ಮೇಲೆ ಕಾಲಾಕಿ ತಬ್ಬಿಕೊಂಡು ಕುಂತಿದ್ದ ಕೆಂಪಾಲಗನನ್ನು ನೋಡಿದ ಲಚ್ಮಿಗೆ ಸ್ವಾಮಿ ಮಾದಪ್ಪನೇ ಮನೆಗೆ ಬಂದಂಗೆ ದರುಶನವಾಗಿ ಕೈ ಮುಗಿದು ನಿಂತಳು!. ರಕ್ತಪಾನಕ್ಕೆ ಡಿಸ್ಟರ್ಬ್ ಮಾಡಿದಕ್ಕೆ ತನ್ನ ನಿಗಿನಿಗಿ ಕಣ್ಣುಗಳನ್ನು ಅರಳಿಸಿ ತನ್ನ ಕಟವಾಯಿಯನ್ನು ಮೇಲೆ ಸರಿಸಿ ಹಲ್ಲುಗಳನ್ನು ಪ್ರದರ್ಶನ ಮಾಡಿ ಗುರಗುಟ್ಟಿತ್ತು ಗಡ್ಡುಲಿಯು. ಅದರ ಒಂದೇ ಒದರಿಗೆ ಕೆಂಪಲಗನೂ ತಡಕೆಯಾಚೆ ಬಿದ್ದು. "ಅಯ್ಯಯ್ಯೋ ! ಏ ಮಾರಿ....ಲಚ್ಮಿ...........ಲವ್ವೋ......... ಗುಡ್ಡುಲಿ ಬಂದ್ಬುಟದೇ ಬಾರ್ರೇ ಎಂದು ಬೊಬ್ಬೆಯಿಟ್ಟನು.

ಆ ಕೂಗಾಟವು ಕಿರಿಚಾಟವಾಗಿ ಕಿರಿಚಾಟಕ್ಕೆ ಅವನ ಬಾಮೈಕ್ಳು, ಸದ್ಯ ಮಾವನಾದ ಗುಸ ಬೈರನು, ಕುಳೀರ ಸಾಕನು ಎಲ್ಲರಿಗೂ ಮೈಯಲ್ಲಿ ಅಡ್ರಿನಾಲಿನ್ ರಿಲೀಜ್ ಆಗಿ, ಬೇಟೆಯೆಂಬುದು, ಮೃಗವೆಂಬುದು ಹಳ್ಳಿಗೆ ಲಗ್ಗೆ ಇಕ್ಕಿದ್ದು ತಿಳಿದು, ಸಬ್ಬಲು,

ಬರ್ಜಿ, ಕುಡುಗೋಲು, ಬೆಟ್ ಕುಡ್ಲುಗಳನ್ನು, ಓಡೋಡಿ ತರುವಷ್ಟರಲ್ಲಿ ಅವರಿಗೇ ಆಯುಧಗಳು ಸಾಲ್ವೇಜ್ ಇದೆ ಅನ್ನಿಸಿತು. ಮೊದಲು ಬಂದ ಹಿರಿತಲೆ ಸಿದ್ದನು ತನ್ನ ಬೆಟ್ ಕುಡ್ಲುನಿಂದ ದೂರದಿಂದಲೇ ಕರುವಿನ ಮೇಲೆ ಅವುಚಿ ರಕ್ತ ಕುಡಿತಿದ್ದ ಗಡ್ಡುಲಿಗೆ ಬೀಸಿದ. ಆ ಹೊಡೆತಕ್ಕೆ ಕುಡ್ಲು ಗುಯ್ಯನೆ ತಿರುಗಿ ಗಡ್ಡುಲಿಯ ಗಡ್ಡದ ಜುಬ್ರುಕ್ಕೆ ಬಡಿದು ಗೊಂತು ಕಲ್ಲಿಗೆ ತಗುಲಿ ಮುರುದಿಕ್ಕಿಕೊಂಡಿತು.

ನಿರಾಯುಧರಾಗಿ ನಿಂತಿದ್ದ, ಬೊಬ್ಬೆಯಾಕುತ್ತ, ಚೀರುತ್ತಾ, ಅಳುತ್ತಾ, ಇದ್ದ ಮಾನವ ಪ್ರಾಣಿಗಳನ್ನು ಕಂಡು ಬೆದರಿದ ಗಡ್ಡುಲಿಯು ಚಂಗನೆ ಕಣಜದ ಮೇಲೆ ಎಗರಿ ಡಿಫೆನ್ಸಿವ್ ಮೋಡ್ ನಲ್ಲಿ ಕುಳಿತು, ಇನ್ಸ್ ಎಂದು ಬಾಯಿ ಕಳಚಿ ಆವ್ ೦ ..... ಎಂದಿದ್ದಕ್ಕೆ, ಬಾಗಿಲಲ್ಲಿ ನಿಂತಿದ್ದ ಗಂಡುಗಳು, ಹೆಣ್ಣುಗಳು, ಮುದುಕಿ - ಮುದುಕರು ತಡಕ್ಕನೆ ಎಗರಿ ಮೂರು ಗಜ ಹಿಂದಕ್ಕೆ ಬಿದ್ದರೆ, ಕೆಲವರ ಕಾಲು ನಡುಗುತ್ತಿತ್ತು. ಸಿದ್ದನಿಗೆ ಒಂದಕ್ಕೆ ಹೋಗಬೇಕೆನಿಸಿತು!.

ಕೇರಿಗೆ ಸಿಂಬ ಬಂದ ಸುದ್ದಿ ಅತ್ತಗಿರಲಿ ಈ ಶನಿಯನ್ನು ಊರು ಬಿಟ್ಟು ಓಡಿಸೋದು ಹೆಂಗೆ ? ಎಂದು ಹಿರಿಯ-ಕಿರಿಯ ತಲೆಗಳು ತಲೆ ಕೆಡಸಿಕೊಂಡಿದ್ದಾಗ ದೂರದಲ್ಲಿ ಕುಳಿತ ಹಿರಿಯಜ್ಜಿ ಮುದುಕಿ"

*"ನಾನೇಳಿಲ್ಲೇನೋ ಮೊನ್ನೇನೆ ಹುಣಸನಳ್ಳಿ ಬಸಪ್ಪನ ಪೂಜೆ ಮಾಡ್ಸ ಕೋ ಬಾರೋ ಅಂತ. ಇವತ್ತು ಆ ಸ್ವಾಮಿನೇ? ಪರಮಾತ್ಮನ್ನನೇ? ಮನೆಲೇ ಒಡದ್ ಸಾಯಿಸ್ತಿಯೇನೋ ?*

*ಸಿವಾ! ಇನ್ನಾ ಏನೇನ್ ನೋಡ್ಬೇಕೋ ಈ ಕಣ್ಣಾಗ "* ಎಂದು ಮುದುಕಿ ಎಂದಿದ್ದಕ್ಕೆ ಅವರ ಸೊಸೆಯು ಸೋಭಾನವಾಗಿ " ಆಹಾಹ ಬಂದ್ಬುಟ್ಲು ಇಲ್ಲಿ ! ಆರ್ ತಿಂಗಳಿಂದ ಸಾಕಿದ್ದೇ ಕರ, ಅದರ ಪಡೆ ಕಿತ್ತೋಗಾ ಬಾಯಾಗ ಇಕ್ಕೋಂತು, ಅದಕ್ಕೆ ಮಾಡ್ತಾ ಇರೋದೇ ಸರಿ ಸುಮ್ನೆ ಇರೇ ಮುದ್ಕಿ ಎಂದು ತೆಪ್ಪಗಾಗಿಸಿದಳು.

ಊರಿನ ಗಂಡುಗಲಿ ನರರೆಲ್ಲಾ ಸೇರಿ ಹಿರಿ-ತಲೆಗಳು ಕಿರಿ- ತಲೆಗಳು ಬೆರೆತು ಬೀಡಿ ಹಚ್ಚಿ ಪಿಲಾನ್ ನಡೆದು ರಜಾಕಣ್ಣನ ಮನೆಗಿರೋ ಗನ್ನು ತರಸಿ, ಆ ಸರಿರಾತ್ರೀಲಿ ಆರು ಇಂಚು ಲೋಡ್ ಮಾಡಿ, ಸಕಲರೂ ತಮ್ಮ ತಮ್ಮ ಶಕ್ತಾನುಸಾರವಾಗಿ ಆ ಮಚ್ಚು, ದೊಣ್ಣೆ, ಬೆಟ್ ಕುಡ್ಲು, ಚಾಕು ಗಡಾರಿ ಎಲ್ಲಾ ಸರಿ ಮಾಡ್ಕೊಂಡು ಕಣಜದ ಮೇಲೆ ಕುಳಿತ ಗಡ್ಡುಲಿ ಬೇಟೆಗೆ ನಿಂತರು.

"ನನ್ನ ಬೇಗ ಕರಕೋ ಬಾರದೇನಪ್ಪ ನನ್ನ ಜೊತೆಗಾರರೆಲ್ಲಾ ಹೋಗ್ಬಿಟ್ರು" ಇದನ್ನಾ ನೋಡಾಕಿಂತಾ, ನಾನು ಯಾವಾಗಪ್ಪಾ ಸಾಯೋದು ಯಾವಾಗಪ್ಪಾ ನನ್ನ ಗುಂಡಿ ತೋಡಿ ಮುಚ್ಚೋದು ಎಂದು ಒಬ್ಬಳೇ ಕಲ್ಲು ಚಪ್ಪಡಿ ಮೇಲೆ ಕುಳಿತು ಹನಿ ಹನಿ ಮಳೆಯಂತೆ ತೊಟಕಾ ತೊಟಕಾ ಎಂದು ಮಾತಾಡುತ್ತಿದ್ದರೆ ಮುದುಕಿ, *"ಮುಚ್ಚೇ ಬಾಯಿ! ಅಮ್ಮ........... ತಾಯಿ....."* ಎಂದು ಸುಮ್ಮನಾಗಿಸಿದಳು ಸೊಸೆ.

ಮುಂದೆ ಗನ್ನು ಧಾರಿ, ರಜಾಕಣ್ಣನೂ ಕಣಜದ ಮೇಲೆ ಅವುಚಿಕೊಂಡು ಕುಂತಿದ್ದ ಧಡಿ ತಲೆ ಗಡ್ಡುಲಿಗೆ ಒಂದೇ ಒಂದು ಥಮ್ ಅನಿಸಿದನು. ಆ ಸದ್ದಿಗಾಗಿ ಕಾದು ನಿಂತಿದ್ದ ಗಂಡುಗಳು ಎಲ್ಲರು ಒಮ್ಮೆಲೆ ನುಗ್ಗಿ ತಲೆಗೊಂದು ಏಟಂತೆ ಬೊಬ್ಬೆ ಇಡುತ್ತಾ ಚೆನ್ನಾಗಿ ಚಚ್ಚುವಾಗ ಮೂರ್ನಾಲ್ಕು ಜನರ ಕೈ ಕಾಲುಗಳಲ್ಲಿ ರಕ್ತ ಸುರಿಸುಕೊಂಡು ಕೂಗುತ್ತಾ ಬಂದರು. ಕುಳ್ಳೀರನ ಕಿರುಬೆರಳು ಮಾತ್ರ ಅರ್ಧ ಕಟ್ ಆಗಿ ನ್ಯಾತಾಡುತಿತ್ತು . ಅಡ್ರಿನಾಲಿನ್ ಪರವಶವಾಗಿ ಹೋಗಿದ್ದ ಗಂಡುಗಳು ತಮ್ಮ ಇದ್ದಬದ್ದ ಕ್ವಾಪವನ್ನು ಸಿಂಹಕ್ಕೆ ತೋರಿಸಹೋಗಿ ಕತ್ತಲೆಯಲ್ಲಿ ಅವರವರ ಕತ್ತಿ ಮಚ್ಚು ಗಳಿಂದ ಅವರವರ ಕಾಲು ಕೈಗಳಿಗೆ ಚಚ್ಚಿ ಕೊಂಡಿದ್ದರು . ಕೊನೆಗೂ ಸಿಂಬದ ಹೆಣವನ್ನು ಬಾಗಿಲ ಮುಂದೆ ಹೊತ್ತು ತಂದು ಹಾಕಿದರೂ.

ಸ್ವಲ್ಪ ಕಾಲ ಯಾರೂ ಮಾತಾಡದೇ ಎಲ್ಲೆಲ್ಲಿ ಗಾಯವಾಗಿದೇ ಎಂದು ತಮ್ಮ ತಮ್ಮ ಕೈ ಕಾಲುಗಳನ್ನು ನೋಡಿ ಕೊಳ್ಳತೊಡಗಿದರು. ದೂರದಲ್ಲಿದ್ದ ಹೆಂಗಸರು ಹತ್ತಿರ ಬಂದರು . ಮಕ್ಕಳು ಕಣ್ಣು ಬಾಯಿ ಅಗಲಿಸಿ ಪಂಜಿನ ಬೆಳಕಲ್ಲಿ ಸಿಂಬವನ್ನು ಕಂಡವು. ಕಾಲು ಕೈಗಳಿಂದ ರಕ್ತ ಸೋರಿಸಿಕೊಂಡು ಬಂದ ಗಂಡುಗಳಿಗೆ ಅವರವರ ಹೆಂಡರುಗಳು ಔಷದೋಪಚಾರ ಮಾಡಿ ಕಾರುತ್ತಿದ್ದ ರಕ್ತವನ್ನ ನಿಲ್ಲುವಂತೆ ಮಾಡಿದರು.

"ಆ ಹೊತ್ತಿಗೆ ಸರಿಯಾಗಿ ಕಾಡು ಕಾಯುವ ಡೂಟಿ ಕೆಲಸಕ್ಕೆ ಸೇರಿದ ಗುಟ್ಟೆಗೆ ಇಂಪರ್ಮೇಸ್ ಗೊತ್ತಾಗಿ ಡೂಟಿ ಮುಗಿಸಿ ಮನೆಗೆ ಬಂದನು. ಅವನ ಕೆಲಸ ಕಾಡು ಕಾಯುವುದಾದರೂ ಇವನು ಒಮ್ಮೊಮ್ಮೆ ಊರಿನಲ್ಲಿ ನಾಯಿ ಸತ್ತರೂ, ನರಿ ಸತ್ತರೂ, ಮದುವೆಯಾದರೂ, ಕುಟುಕೆಯಾಗಲಿ, ಉಸಿರಾಡಿದರೂ, ಹೂಸು ಬಿಟ್ಟರೂ ಅದರ ಸುದ್ಧಿಯನ್ನು ದೊಡ್ಡಮನೆ ಗೌಡರಿಗೆ ತಿಳಿಸುವುದು ಇವನ ಆಜನ್ಮ ಸಿದ್ದ ಹಕ್ಕು ಎಂದೇ ತಿಳಿದಿದ್ದ.

ಗುಟ್ಟೆಯು ಮೂರುದಿನದ ಹಿಂದೆ ತಪ್ಪಿಸಿಕೊಂಡಿದ್ದ ಗಡ್ಡುಲಿ ಕಿಲ್ಲಿಂಗ್ ಆಗಿರೋ ಸ್ಪಾಟ್ ಗೆ ಬಂದು "ನೋಡಿ ಸಿದ್ದಣ್ಣಾ. . ಕಾಡು ಮೃಗ ಮನೆಗ್ ಬರೋದು ದನಕರ ಹಿಡಿಯೋದು ಸಾಮಾನ್ಯ. ಅದಕ್ಕೆ ಪರಿಹಾರ ಕೊಡೊಕೆ ಪಾರೆಸ್ಟರ್ ಅವರೆ, ಗೌರ್ಮೆಂಟ್ ಇದೆ.

ನೀವು ನಮಗೊಂದು ಮೆಸೇಜ್ ತಿಳಿಸ್ದೇ ಕೊಂದಿರೋದು ದೊಡ್ಡ ಕೇಸು.  ಏನಾದರೂ ಇದು ಒಳ್ಳೆ ಕೇಸಲ್ಲ. ಎಂದು ಮೊದಲು ನಾವು ದೊಡ್ಡ ಗೌಡರಿಗೆ ತಿಳಿಸಬಿಡಾನ  ಎಂದಿದಕ್ಕೆ ಸಿದ್ದನಿಗೆ ಎಲ್ಲಿಂದಲೋ ಕೋಪಬಂದು, ನಮ್ಮ ಅಟ್ಟಿಗೆ ನುಗ್ಗಿರೋ ಇದನ್ನ ಜೀವಸಹಿತ ಬಿದ್ಬೇಕೆನ್ ಸ್ವಾಮಿ. ಎಂದು ಸತ್ತಿರುವ ಸಿಂಬದ ಕಳೆಬರಕ್ಕೆ ಜಾಡಿಸಿ ಒದ್ದು ಕೋಪ ತಿರಿಸಿಕೊಂಡನು.

ಇಬ್ಬರೂ ಸೇರಿ, ಊರಿನ ಹಿರಿತಲೆಗಳು ಗೌಡರನ್ನ ಸಂಧಿಸಿ ಸಂದೀ ಕಾರ್ಯವನ್ನು ಪ್ರಸ್ಥಾಪಿಸಿ. ಕೊನೆಗೆ ಹುಚ್ಚನಕುಂಟೆ ಹಳ್ಳದಲ್ಲಿ ಆಳುದ್ದ  ಗುಂಡಿ ತೋಡಿ  ಸತ್ತ ಸಿಂಬವ ಮಣ್ಣುಮಾಡಿ ನೆಲವನ್ನೆಲ್ಲ ಸಮಮಾಡಿ ಉಚ್ಚೆಳ್ಳು ಕಡ್ಡಿ ಸೋಗೆಯಲ್ಲಾ ಹಾಕಿ,  ಸುಟ್ಟು ರಾತ್ರೋ ರಾತ್ರಿ ಸುತ್ತಲೂ ಉತ್ತು  ಸಮಾ ಮಾಡಿ ಆರಾಮಾಗಿ ಸದ್ದು-ಸುದ್ದು ಇಲ್ಲದೇ ಊರಿಗೆ ಊರೇ ಸಿಂಬಕ್ಕೆ ಹೊಡೆದ ಹೊಡೆತಗಳನ್ನು ಹೇಳಿಕೊಂಡು ಖುಷಿಪಡುತಿತ್ತು, ಊರನ್ನು ಸಿಂಬದಿಂದ ಕಾಪಾಡಿದ ಗನ್ನುಳ್ಳ ರಜಾಕಣ್ಣನಿಗೆ ಪರಾಕುಗಳು ಸಿಕ್ಕವು.




ಬನ್ನೇರುಘಟ್ಟ ಝೂ ನಿಂದ ತಪ್ಪಿಸಿಕೊಂಡು ಬಂದ ಮೂರು ಸಿಂಬಗಳನ್ನು ಹುಡುಕುತ್ತಾ ಹುಡುಕುತ್ತಾ ಪೊದೆಗಳನ್ನ ಸೋದಿಸಿ ಹುಡುಕಿ ಸೊರಗಿದ್ದ ಗುಟ್ಟೆಯ ಬಳಗ  ಮತ್ತು ವಾಚರ್ಗಳು *"ಈ ಕೆಲಸನೂ ಬೇಡ ಏನು ಬೇಡ ಹೋಗಲೇ!"* ಎನ್ನುತ್ತಾ

ಹುಡುಕುತ್ತ ಹುಡುಕುತ್ತ ಬಳಲಿ ಬರಲಾಗಿ, ಸಕ್ಕರೆಕೆರೆಯ ಬಳಿ ಒಂದು ಸಿಂಬವನ್ನು ಬೋನಿಗೆ ಕೆಡವಿ , ಮತ್ತೊಂದು ಸಿಂಬವನ್ನು ಸುದ್ದಳ್ಳದಲ್ಲಿ ಬಲೆಗೆ ಬೀಳಲಾಗಿ, ಇನ್ನೊಂದು ಸಿಂಬಕ್ಕಾಗಿ ಕಾಡಿನ ಪೊದೆಪೊದೆಗಳನ್ನು ಸೋಸಿದರೂ ಸಿಗದೇ,  ಹಳ್ಳಿ ಹಳ್ಳಿ ಯ ದನ ಕುರಿ ಕಾಯುವ ಎಲ್ಲರನ್ನೂ ಕೇಳಿ ..............
ತಿಳಿದರೂ............... ಸಿಗದೇ . ಮೂರ್ನಾಲ್ಕು ತಿಂಗಳು ಹುಡುಕಿದರೂ ಸಿಂಬ ಸಿಗಲಿಲ್ಲ. ಕೊನೆಗೆ ಸಿಂಬ ಕಳೆದು ಹೋಗಿದೆ ಎಂದು ರೆಕಾರ್ಡ್ ಮಾಡಲಾಯಿತುರೆಕಾರ್ಡು  .

ಕೆಂಪಾಳಗನೂ ಇನ್ನೂ .ನಶಿಸಿಹೋಯ್ತುರಾಷ್ಟ್ರೀಯ ಉದ್ಯಾನದಲ್ಲಿ ಕುರಿ ಮೇಯಿಸುತ್ತಿದ್ದಾನೆ.

- ಶಂಕರಪ್ಪ.ಕೆ.ಪಿ





# ಹಕ್ಕಿ ಲೋಕ

## *ಹುಲ್ಲುಗಾವಲು

ವೈಜ್ಞಾನಿಕ ಹೆಸರು: ***Dicrurus macrocercus***

ಇಂಗ್ಲೀಷ್ ಹೆಸರು: **Black Drongo**

ಸಾವಿರಾರು ಹೆಕ್ಟರ್ ಬಟ್ಟಬಯಲಾದ ಹುಲ್ಲುಗಾವಲು, ಅಲ್ಲಲ್ಲಿ ಲಂಟಾನದ ಪೊದೆಗಳು, ಕುರುಚಲು ಸಸ್ಯಗಳು, ಹಲವಾರು ಹುಲ್ಲುಜಾತಿಯ ಸಸ್ಯಗಳ ನಡುವೆ ಅಂಚಿಕಡ್ಡಿ (ಪೊರಕೆಕಡ್ಡಿ)ಯ ಗೊಂಚುಲುಗಳು ಉಲುಸಾಗಿ ಬೆಳೆದು ನಿಂತ್ತಿತ್ತು. ಪೊದೆಗಳಿಂದ ಹೊರಬಂದ ಮೊಲಗಳು ಹಸಿರು ಚಿಗುರು ಹುಲ್ಲನ್ನು ಮೇಯುತ್ತಿದ್ದವು. ಸ್ಕೈ ಲಾರ್ಕ್ ಹಕ್ಕಿಗಳು ಹುಲ್ಲಿನಿಂದ ಎದ್ದು ಆಗಸಕ್ಕೆ ಚಿಮ್ಮಿ ಮೆಲ್ಲನೇ ಕೀ ಕ್ಕೀ ಹ್ವೀ. . . ಕೀ ಕ್ಕೀ ಹ್ವೀ. . . ಕೀ ಕ್ಕೀ ಹ್ವೀ. . .ಎಂದು ಇಳಿಯುತ್ತಿದ್ದವು. ಇಲಿಗಳಂತು ಹುಲ್ಲಿನ ತೇನೆಗಳನ್ನು ಇಡಿದು ಮೆಲುಕು ಹಾಕುತ್ತಾ ಕುಳಿತಿದ್ದವು. ಬೇಸಿಗೆಯ ಬಿಸಿಲಿನ ತಾಪಕ್ಕೆ ಹುಲ್ಲೆಲ್ಲ ಒಣಗಿ ಹೋಗಿ, ಹಳದಿಯಾಗಿ ಬಂಗಾರದಂತೆ ಒಳೆಯುತ್ತಿತ್ತು. ಅಲ್ಲಲ್ಲಿ ದೊಡ್ಡ ದೊಡ್ಡದಾಗಿ ಕಪ್ಪುಬಣ್ಣವಾದ ಹುಲ್ಲುಗಾವಲು ಮೇಲನೇ ನಡೆಯುತ್ತಾ ಮುಂದು ಮುಂದಕ್ಕೆ ಮೊಡಗಳ ಜೊತೆ ಚಲಿಸುತ್ತಿತ್ತು.

ಯಾವೊದೋ ದೊಡ್ಡ ಹದ್ದಿನ ನೆರಳಿರಬೇಕೆಂದು ಬೆಚ್ಚಿಬಿದ್ದು ಇಲಿ-ಮೊಲಗಳು ಬಿಲ ಸೇರುತ್ತಿದ್ದವು, ಹೆಬ್ಬಾವುಗಳು ಸಹ ಒಂದೆರಡು ಭಾರಿ ಕಂಡಿದ್ದು ಉಂಟು!, ಅಂದೊಂದು ದಿನ ಸುಮಾರು ಎಂಟ್ಟತ್ತು ಅಡಿ ಉದ್ದದ, ಎಂಬತ್ತು ಕೆಜಿಯಷ್ಟು ತೂಕವಿರುವ ಹೆಬ್ಬಾವೊಂದು ರಾಮಚಾರಿಯ ಕುರಿಯನ್ನು ನುಂಗಿ ನೂರು ಕೆಜಿಯಾದ್ದದ್ದು ಅಚ್ಚರಿಯೇ! ಸುಬ್ಬನ್ ಸಾಬಿಯಂತು ಖುಷಿಯಾಗಿ ಫಾರೆಸ್ಟ್ ರೇಂಜರಿಗೆ ಫೋನ್ ಮಾಡಿ ಅತಿ ದೊಡ್ಡ ಹಾವೊಂದು ಸಿಕ್ಕಿದೆ ಬೇಗ ಬನ್ನಿ ಎಂದು ವಿಷಯ ಮುಟ್ಟಿಸಿದ, ಫಾರೆಸ್ಟರು ಜೀಪಿನೊಂದಿಗೆ ಗಾರ್ಡುಗಳು, ವಾಚರ್ಗಳು, ಹಾವು ಹಿಡಿಯುವ ಎಕ್ಸ್ ಪರ್ಟ್ಗಳೊಂದಿಗೆ ದೊಡ್ಡ ದೊಡ್ಡ ಗೋಣಿಚೀಲಗಳು, ಕೋಲುಗಳ ಬದಲಾಗಿ ದೊಡ್ಡ ದೊಡ್ಡ ಮರಗಳನ್ನೇ ಜೀಪಿನಲ್ಲಿ ತುಂಬಿಕೊಂಡು ದೂರದಲ್ಲಿ ಬರುತ್ತಿತ್ತು. ನನಗೆ ಇದೇನು ಫಾರೆಸ್ಟರುಗಳೋ ಅಥವಾ ಯಾವುದೋ ಸರ್ಕಸ್ ಕಂಪನಿಯವರೋ ಎಂಬ ಅನುಮಾನ ಮೂಡಿತು. ಸರ್ಕಸ್ನವರು ಹೀಗೆಯೇ ಮರಗಳು, ಚೀಲಗಳು, ಬಲೆಯಂತ್ತಿರುವ ಸ್ಕ್ರೀನುಗಳನ್ನು ತರುತ್ತಾರೆ, ಅಂತೆಯೇ ಕಂಡರು. ನಾವು ಹಾವನ್ನು ನೋಡಲು ಹೋಗಿರುವ ನೂರಾರು ಜನರ ಮುಂದೆ ಬಂದು ಜೀಪು ನಿಲ್ಲಿಸಿತು. "ಏ. . .ಎಲ್ರೀ ಹಾವಿರೋದು! ಇಲ್ಲಿ?" ಎಂದು ಕೇಳಿದ ಮಿಲ್ಟ್ರಿ ಟೋಪಿಯವನು. "ಹೇಗೆ ಫಾರೆಸ್ಟ್ರನ ಕರೆಸಿದ್ದು" ಎಂದು ಜಂಬದಿಂದ ಬೀಗುತ್ತಿದ್ದ ಸುಬ್ಬನ್ ಸಾಬಿ. ಮುಂದೆ ಹೋಗಿ "ಬನ್ನಿ ಸಾರ್ ತೋರಿಸ್ತೀನಿ. . .!" ಎಂದು ಪೊದೆಯ ಒಳಗೆ ನುಗ್ಗಿ ತೋರಿಸ್ತಿದ್ದ. ಎಕ್ಸ್ ಪರ್ಟ್ಗಳು ಹಾವಿನ ಬಾಲವನ್ನು ಹಿಡಿದು ಜಗ್ಗಿದ್ದೇ ತಡ, ಹಾವು ಪೊದೆಯ ಬುಡಕ್ಕೆ ಸುತ್ತಿಕೊಂಡು ಜಪ್ಪೋ ಎಂದರು ಇವರಿಂದ ಬಿಡಿಸಲು ಸಾಧ್ಯವಾಗದೆ ಹಾವಿನ ಬದಲಾಗಿ






ಇವರೆ ಬುಸ್ ಬುಸ್ ಎಂದು ಸಾಕಾಗಿ ಕುಳಿತರು. ಹೇಗೋ ಸರ್ಕಸ್ ಮಾಡಿ ಸಂಜೆ ವೇಳೆಗೆ ಬಿಡಿಸಿ ಹೊರತಂದ ಫಾರೆಸ್ಟ್ರುಗಳು ಖುಷಿಯಿಂದ ಬೀಗಿ ಜನರಿ ತೋರಿಸಿ "ಇದೇ ಫಷ್ಟು ಇಷ್ಟುದಪ್ಪಾ !ಇಷ್ಟು ಉದ್ದಾ! ಹಾವು ನೋಡಿದ್ದು!" ಎಂದು ಹೇಳುತ್ತಿದ್ದರು, ಸುಮಾರು ಹತ್ತದಿನೈದು ಮಂದಿ ಹಾವನ್ನು ಹಿಡಿದು ಮೇಲಕ್ಕೆತ್ತಿ ಜೀಪಿನ ಹಿಂಬದಿಯ ಟ್ರಾಲಿಯಲ್ಲಿ ಹೇಗೋ ಇರಿಸಿ ಬನ್ನೇರುಘಟ್ಟ ಪಾರ್ಕ್ಗೆ ತೆಗೆದುಕೊಂಡು ಹೋದರು ಬಿಡಿ! ಹೀಗೆ ಹುಲ್ಲುಗಾವಲಿನಲ್ಲಿ ಹಾವುಗಳಿಗೇನು ಕಡಿಮೆ ಇಲ್ಲ.

ಮೊದಲಿಗೆ ಈ ಜಾಗವೇನು ಹುಲ್ಲುಗಾವಲಲ್ಲ, ಈ ಪ್ರದೇಶದಲ್ಲಿ ಸುತ್ತಮುತ್ತಲಿನ ಹಳ್ಳಿಯ ದನ-ಕರುಗಳು ಮೇಯುತ್ತಿದ್ದವು. ಸೌದೆಗಾಗಿ ಲಾಂಟನದ ಗಿಡ-ಮರಗಳು ಕಡಿದು ಮನೆಗೆ ಒಯ್ಯುತ್ತಿದ್ದರು. ಹುಲ್ಲು ಅಷ್ಟೇನೂ ಇಲ್ಲದೆ ಬರಿ ಮಳೆಗಾಲದಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಹುಲ್ಲುಗಾವಲಿನಂತೆ ಕಾಣುತ್ತಿತ್ತು. ಮರಗಳ್ಳರ ಕಾಟ ಹೆಚ್ಚಾದ ಕಾರಣ ಈ ಪ್ರದೇಶಕ್ಕೆ ತಮಿಳುನಾಡಿನ ಮಿಲಿಟರಿ ರಿಟೇರ್ಡ್ ಆದ ನಾಲ್ಕೈದು ಗಟ್ಟಿಮುಟ್ಟಾದ ಆಳುಗಳನ್ನು ತಂದಿರಿಸಿದರು. ಈ ಸಾವಿರಾರು ಹೆಕ್ಟೆರ್ ಜಮೀನು ಹರಿಕೊಡೆಯವನದು. ಹರಿಕೊಡೆ ನಿಮಗೆ ಗೊತ್ತಿರಬೇಕು, ಅವನದು ರಮ್ಮು, ವಿಸ್ಕಿ ತಯಾರಿಸುವ ದೊಡ್ಡ ಕಂಪನಿಯೇ ಇದೆ. ಇವನು ಈ ಜಾಗವನ್ನು ಏನೂ ಮಾಡದೆ ಹಾಗೇ ಬೀಡುಬಿಟ್ಟು ಸುಮಾರು ವರ್ಷಗಳಿಂದ ಸುತ್ತಮುತ್ತಲಿನ ಹಳ್ಳಿ ಜನಗಳ ದನ-ಕರುಗಳಿಗೆ ಮೇಯಿಸಲು ಜಾಗ, ಸೌದೆ ಮುಂತಾದ ಉತ್ಪನ್ನಗಳು ಸುಲಭವಾಗಿ ಸಿಗಲು ಅನುಕೂಲವಾಗಿತ್ತು. ಆದರೆ ಮರಗಳ್ಳರ ಕಾಟ ಹೆಚ್ಚಾಗಿ ಯಾವುದೇ ದನಕರುಗಳನ್ನು ಬರದಂತೆ ಬಿಡದೆ ಸುತ್ತಲು ಕಂಪೌಂಡ್ ಹಾಕಿ ಎಲ್ಲಾ ಚಟುವಟಿಕೆಗಳನ್ನು ನಿಲ್ಲಿಸಿ, ತಮಿಳುನಾಡಿನ ಮಿಲಿಟರಿ ಆಳುಗಳನ್ನು ತಂದಿರಿಸಿ ಸುಮಾರು ಎರಡು-ಮೂರು ವರ್ಷಗಳು ಫುಲ್ ಸ್ಟ್ರಿಕ್ಟು ಮಾಡಿದ್ದು ದೊಡ್ಡ ಹುಲ್ಲುಗಾವಲಾಗಲು ಕಾರಣವಾಯಿತು.

ಹುಲುಸಾಗಿ ಬೆಳೆದ ಹುಲ್ಲು ಆಳೆತ್ತರಕ್ಕೆ ನಿಂತಿತ್ತು, ಆದರೆ ದನಗಳು ಮೇಯುವುದಕ್ಕಾಗಲೀ ಕೊಂಡಯ್ಯಲಾಗಲಿ ಬಿಡುತ್ತಿರಲ್ಲಿಲ್ಲ. ಲಾಂಟನ ಗಿಡಗಳಂತು ಬೆಳೆದು ದೊಡ್ಡ ದೊಡ್ಡ ಪೊದೆಗಳಾಗಿದ್ದವು. ಆದರೆ ಹಳ್ಳಿಗರು ಸೌದೆ ಕಡಿದು ತೆಗೆದುಕೊಂಡು ಹೋಗಲು ಬಿಡುತ್ತಿರಲಿಲ್ಲ. ಹುಲ್ಲುಗಾವಲಿನಲ್ಲಿ ಎಲ್ಲೆಂದರಲ್ಲಿ ಸಿಕ್ಕಾಪಟ್ಟೆ ಬೆಳೆದು ನಿಂತಿದ್ದ ಹಂಚಿಕಡ್ಡಿ(ಪೊರಕೆಕಡ್ಡಿ)ಗಳು "ಹತ್ತು ನಿಮಿಷ ಬಿಟ್ಟರೆ ಸಾಕು ಮನೆಗೆ ವರ್ಷಕ್ಕೆ ಬೇಕಾಗುವಷ್ಟು ಪೊರಕೆಕಡ್ಡಿಯನ್ನು ಕುಯ್ದುಕೊಳ್ಳುತ್ತೇವೆ" ಎಂಬ ಮಾತುಗಳು ಜನರ ಬಾಯಲ್ಲಿ ಬರುತ್ತಿದ್ದವು. ಇದೆಲ್ಲ ತಮಿಳುನಾಡಿನಿಂದ ಬಂದಿದ್ದ ವಾಚ್ ಮ್ಯಾನ್ಗಳಾದ ಮುರುಗನ್ ಮತ್ತು ಆರ್ಮುಗನ್ ರವರ ಮಿಲಿಟರಿಯ ನಿಷ್ಠತೆಯನ್ನು ತೋರಿಸುತ್ತದೆ. ಬರೀ ಎರಡು ವರ್ಷದಲ್ಲಿ ದೊಡ್ಡದೊಂದು ಹುಲ್ಲುಗಾವಲನ್ನು ಸೃಷ್ಟಿಸಿದ ಕೀರ್ತಿ ಇವರದೆ ಬಿಡಿ! ಅಷ್ಟು ಸ್ಟ್ರಿಕ್ಟು.

ಇನ್ನೂ ದುರ್ಗನದ್ದು ಇನ್ನೊಂದು ಸಮಸ್ಯೆ "ಈ ಬೋಳಿ ಮಕ್ಳು ಬಂದು, ನಮ್ಗೆ ಕಾಡ್ಕೋಳಿ ಹೊಡೆಯೋಕೆ ಬಿಡಲ್ವವ?" ಎಂಬ ಚಿಂತೆ ಈ ಮಿಲಿಟರಿ ವಾಚ್ ಮ್ಯಾನ್ ಗಳ ಮೇಲೆ ತುಂಬ ಕೋಪ. ಒಂದೆರಡು ಬಾರಿ ತನ್ನ ನಾಲ್ಕೈದು ನಾಯಿಗಳ ಜೊತೆ ಒಳಗೆ ನುಗ್ಗಿ ಬಂದೂಕಿನಿಂದ ಕಾಡ್ಕೋಳಿಗಳನ್ನು ಬೇಟೆಮಾಡಿ ಮಿಲಿಟರಿ ವಾಚ್ ಮ್ಯಾನ್ಗಳಿಗೆ ಸಿಕ್ಕಿಹಾಕಿಕೊಂಡು ಸಖ್ಖತ್ತಾಗಿ ಹಿಗ್ಗ-ಮುಗ್ಗ ಒದೆಗಳು ತಿಂದು ಬಂದಿದ್ದ. "ಆ ನನ್ಮಕ್ಳಿಗೆ ಮಾಡ್ತಿನಿ ನೋಡು! ಹಾಗೆ ಹೀಗೆ ಜನರ ಬಳಿ ಹೇಳಿಕೊಳ್ಳುತ್ತಿದ್ದ.

ಉರಿಬಿಸಿಲ ಬೇಸಿಗೆಯ ಕಾಲ ಅದು. ಹಿಡಿಹುಲ್ಲುಗಾವಲೇ ಒಣಗಿ ನಿಂತಿತ್ತು. ಒಣಗಿದ ಹುಲ್ಲಿನ ನಡುವೆ ಯಾವುದಾದರು ಇಲಿ ಅಥವಾ ಮೊಲ ಕಾಣುತ್ತಿವೆಯೇ ಎಂದು ಆಕಾಶದಲ್ಲಿ ಹುಡುಕುತ್ತಾ ಹದ್ದುಗಳು ಹಾರಾಡುತ್ತಿದ್ದವು. ಬಿಸಿಲಿನ ತಾಪಕ್ಕೆ ಮೇಲೇಳುವ ಮಿಡತೆ, ಜೇಡ, ಜೇನು ಇಂತಹ ಹುಳ ಹುಪ್ಪಟೆಗಳನ್ನು ಹಿಡಿಯಲು ನೂರಾರು ಕಾಜಾಣ ಮತ್ತು ಸ್ವಾಲೋಗಳು ಆಗಸದಲ್ಲಿ ಹಾರಿ ಬಂದು ಬೇಟೆಯನ್ನು ಗುಳುಂ ಮಾಡುತ್ತಿದ್ದವು. ಇನ್ನೂ ಕಳ್ಳಿಪೀರಗಳಂತು ಜೇನುಹುಳುಗಳನ್ನು ಹಾರಿ ಹಿಡಿದು ಕಡ್ಡಿಗಳಿಗೆ ಬಡಿದು ತಿನ್ನುತ್ತಿದ್ದವು. ಮಿಲಿಟರಿಯವರು ಮಧ್ಯಾಹ್ನದ ಬಿಸಿಲಿಗೆ ಯಾವುದೋ ಮರದ ಕೆಳಗೆ ಕುಳಿತಿದ್ದರೋ



ಏನೋ. ಹುಲ್ಲುಗಾವಲಿನ ಹಂಚುಗಳಲ್ಲಿ ಅಕ್ಕಪಕ್ಕದ ಹಳ್ಳಿಯ ಹೆಂಗಸರು ಪೊರಕೆಕಡ್ಡಿಯನ್ನು ಕದ್ದಿಮುಚ್ಚಿ ಕುಯ್ಯುತ್ತಿದರು, ಉರಿಯುವ ಬಿಸಿಲಿಗೆ ಜನರ ದಟ್ಟಣಿ ತುಂಬ ಕಡಿಮೆಯಾಗಿತ್ತು.

ನಾನು ಪ್ರೈಮರಿ ಸ್ಕೂಲಿನಲ್ಲಿ ಓದುತ್ತಿದ್ದೆ, ಅಂದು ಮಧ್ಯಾಹ್ನ ನನಗೆ ಪರೀಕ್ಷೆಯಿತ್ತು, ಪರೀಕ್ಷೆಗೆಂದು ದಾರಿಯಲ್ಲಿ ನಡೆದು ಬರುತ್ತಿದ್ದೆ. ದುರ್ಗನು ನನ್ನನ್ನು ನೋಡಿ ಹುಲ್ಲಿನಲ್ಲಿ ಅವಿತುಕೊಂಡ, ಎಲ್ಲೋ ಪೊರಕೆಕುಯ್ಯಲೂ ಬಂದಿರಬೇಕು ಎಂದು ಶಾಲೆಯ ಕಡೆ ಬೇಗ ಬೇಗ ಹೊರಟುಹೋದೆ ಸುಮಾರು ಇನ್ನೂರು ಮೀಟರ್ ದೂರ ಹೋಗಿರಬೇಕು! ಜೋರಾಗಿ ಚಟಚಟ ಪಟಪಟ ಎಂಬ ಶಬ್ಧ ಹಿಂದಿನಿಂದ ಬರುತ್ತಿತ್ತು, ಹಿಂದಕ್ಕೆ ತಿರುಗಿ ನೋಡಿದೆ, ಹುಲ್ಲುಗಾವಲು ಮುಗಿಲೆತ್ತರಕ್ಕೆ ಬೆಂಕಿ ಉರಿಯುತ್ತಿತ್ತು. ಆಕಾಶದಲ್ಲಿ ಮೋಡದಂತೆ ಕಪ್ಪು ಹೊಗೆ ಬುಗಬುಗನೇ ಏಳುತ್ತಿತ್ತು. ಎಲ್ಲಿಂದಲೋ ಬಂದ ಸಾವಿರಾರು ನೀಲಕಂಠ ಮತ್ತು ಕಾಜಾಣಗಳು ಆಗಸದ ಬೆಂಕಿ ಹೊಗೆಯ ಮೋಡಗಳ ಮಧ್ಯದಲ್ಲಿ ನುಸುಳಿ ಹಾರಾಡುತ್ತ ಬೆಂಕಿಯಿಂದ ತಪ್ಪಿಸಿಕೊಂಡು ಬರುವ ಹುಳ ಹುಪ್ಪಟೆಗಳನ್ನು ಹಿಡಿದು ತಿನ್ನುತ್ತಿದ್ದವು. ಮಿಲಿಟರಿ ವಾಚ್ ಮ್ಯಾನ್ಗಳ ಮೇಲಿದ್ದ ದ್ವೇಷವನ್ನು ದುರ್ಗನು ಹುಲ್ಲುಗಾವಲಿನ ಮೇಲೆ ತೋರಿಸಿದ್ದಾನೆ ಎಂದು ಎರಡು-ಮೂರು ದಿನಗಳ ನಂತರವೇ ತಿಳಿದಿದ್ದು ನನಗೆ.

ಅದಿರಲಿ ನಾನು ಎಂದೂ ನೋಡದ ಅಷ್ಟು ಕಾಜಾಣಗಳು ಎಲ್ಲಿಂದ ಬಂದವೂ ಎಂಬ ಆಶ್ಚರ್ಯ ನನಗೆ ಇಂದಿಗೂ ತಿಳಿದಿಲ್ಲ. ಸಾವಿರ. . . ಸಾವಿರ. . .ಕಾಜಾಣಗಳು! ಕಣ್ಣಿನಲ್ಲಿ ಅಚ್ಚಳಿಯದೆ ಇಂದಿಗೂ ಹಾಗೆಯೇ ನಿಂತಿದೆ. ಕಾಜಾಣಗಳಿಗೇನೋ ಕಾಳ್ಗಿಚ್ಚು ಹಬ್ಬವಿದಂತೆಯೇ. ಚೀ. . .ಚಿರ್. . . ಚೀ. . .ಚಿರ್. . . ಚೀ. . . ಚೀ. . . ಚೀ. . .ಚಿರ್ರ್. . . ಚಿರ್ರ್. . . ಚಿರ್ರ್. . .ಎಂದು ಕೂಗುತ್ತಾ ಆಕಾಶದಲ್ಲಿ ಹಾರಾಡುತ್ತಾ ಮೇಲೆಳುವ ಹುಳುಗಳನ್ನು ಮೇಲೆಯೇ ಕ್ಯಾಚ್ ಹಿಡಿದು ಭಕ್ಷಿಸುತ್ತವೆ.

ಸಾಮಾನ್ಯವಾಗಿ ಕಾಜಾಣಗಳು ಪಿಕಳಾರ ಗಾತ್ರಕ್ಕಿಂತ ಸ್ವಲ್ಪ ದೊಡ್ಡದು, ನೀಲಿ ಹೊಳಪುಳ್ಳ ಕಪ್ಪು ಹಕ್ಕಿ. ಬಾಲ ಕವಲಾಗಿರುತ್ತದೆ. ಚಿಕ್ಕ ಕೊಕ್ಕು ಹುಳುಗಳನ್ನು ಹಿಡಿಯಲು ಹೇಳಿಮಾಡಿಸಿದ ಅಂಗ. ಕಾಜಾಣಗಳು ಕಡ್ಡಿ ಮತ್ತು ಜೇಡರ ಬಲೆಯನ್ನು ಬಳಸಿ ಬಟ್ಟಲಿನಾಕಾರದ ಗೂಡನ್ನು ಕಟ್ಟಿ, ಕಂದು ಚುಕ್ಕೆಗಳಿರುವ ಮೂರು ಅಥವಾ ಐದು ಬಿಳಿಯ ಮೊಟ್ಟೆಗಳನ್ನು ಇಟ್ಟು ಮರಿಮಾಡುತ್ತವೆ. ತುಂಬ ಧೈರ್ಯಶಾಲಿಯದ ಕಾಜಾಣಗಳು ತನ್ನ ವೈರಿ ಎಷ್ಟೇ ಬಲಶಾಲಿಯಾಗಿದ್ದರೂ ಸರಿಯೇ ಬೆನ್ನಟ್ಟಿ ಓಡಿಸಿ ತನ್ನ ಗೂಡು, ಮರಿಗಳನ್ನು ರಕ್ಷಿಸಿಕೊಳ್ಳುತ್ತದೆ.

ದುರ್ಗನೇನೋ ದ್ವೇಷವನ್ನು ತಿರಿಸಿಕೊಂಡ ಖುಷಿಯಲ್ಲಿ ತೇಲಾಡುತ್ತಿದ್ದ, ಆದರೆ ನಾನು ಮಾಡಿದ್ದು ತಪ್ಪು. ಅಷ್ಟೊಂದು ಜೀವಜಂತುಗಳನ್ನು ಜೀವಂತ ಸುಟ್ಟು ಹಾಕಿದ್ದೆನೆ ಎಂಬ ಮನವರಿಕೆ ಅವನಿಗೆ ಬರಲೇ ಇಲ್ಲ!.





# ಮುತ್ತುಗ

**ಸಾಮಾನ್ಯ ಹೆಸರು** : **Flame of the forest**

**ವೈಜ್ಞಾನಿಕ ಹೆಸರು** : ***Butea mososperma***

**ಕುಟುಂಬ** : **Fabaceae**

ಮುತ್ತುಗ ಮರ ಹೂಬಿಟ್ಟಿತೆಂದರೆ, ಮಕರಂದ ಕುಡಿಯಲು ಪಕ್ಷಿಗಳು ಹೆಂಡದಂಗಡಿಗೆ ಗಿರಾಕಿಗಳು ನುಗ್ಗುವಂತೆ ಸಂತೆ ಸೇರುತ್ತವೆಬುಲ್ ಬುಲ್ ಗಳಿಂದ ಹಿಡಿದು ತ .ರಾವರಿ ಗಿಳಿಗಳು, ಮೈನಗಳು ಸೇರಿ ಹಬ್ಬದ ಸಮಾರಾಧಯೇ ಮಾಡುತ್ತವೆಫೆಬ್ರವರಿ . ತಿಂಗಳಲ್ಲಿಬಣಗಿದ ಕಾಡಿಗೆ ಯಾರೋ ಬೆಂಕಿಯಿಟ್ಟಂತೆ ಕಾಣುವ ಈ ಮರದ ಹೂರಾಶಿ ಪಕ್ಷಿಗಳನ್ನು ಬಹಳ ದೂರದಿಂದಲೇ ಆಕರ್ಷಿಸುತ್ತವೆ.

ಈ ಮರದ ತೊಗಟೆ ದಪ್ಪಗಿದ್ದೂ ಹೂಬಿಡುವಾಗ ತನ್ನ ಎಲ್ಲಾ ಎಲೆಗಳನ್ನು ಉದುರಿಸಿಟ್ಟಿರುತ್ತದೆಹೂವಿನ ಮೊಗ್ಗಿಗೆ ಕಪ್ಪ .ನೆಯ ರೋಮಗಳಿರುತ್ತವೆ.ಹೂ ಕಿತ್ತಳೆ ಕೆಂಪು ಬಣ್ಣಕ್ಕಿದೆ .

ನೀರು ಕಡಿಮೆಯಿದ್ದರೂ ಬೆಳೆಯುವ ಈ ಮರ ಸುಮಾರು ಒಂಬತ್ತು ಮೀಟರ್ ಎತ್ತರ ಬೆಳೆಯುತ್ತದೆ. ಹೊಲದ ಬದುಗಳ ಮೇಲೆ, ರಸ್ತೆಯ ಇಕ್ಕೆಲಗಳಲ್ಲಿ ಬೆಳೆಸಲು ಹೇಳಿ ಮಾಡಿಸಿದ ಮರಮುತ್ತುಗದ ಎಲೆಗಳನ್ನು ಊಟದ ತಟ್ಟೆ ಮತ್ತು ದೊ .ನ್ನೆಗಳನ್ನು ಮಾಡಲು ಹಿಂದೆಲ್ಲ ಬಳಸುತ್ತಿದ್ದುದರಿಂದ ಜನ ಇದರ ಎಲೆಗಳನ್ನು ಕಿತ್ತು ಸಂಗ್ರಹಿಸುತ್ತಿದ್ದರು, ಈಗ ಎಲ್ಲವೂ ಪ್ಲಾಸ್ಟಿಕ್ ಮಯವಾಗಿರುವುದರಿಂದ ಮುತ್ತುಗದ ಎಲೆಗಳಿಗೆ ಬೇಡಿಕೆ ಕಡಿಮೆಯಾಗಿರುವುದು ಸಂತಸದ ಸಮಾಚಾರ.









# ವಿದ್ಯಾರ್ಥಿಗಾಗಿ ವಿಜ್ಞಾನ

## * ಸಗಣಿ ಹುಳಕ್ಕೆ ಹಾಲುಹಾದಿಯೇ ದಿಕ್ಸೂಚಿ






ದಾರಿಯಲ್ಲಿ ಬಿದ್ದಿರುವ ಸಗಣಿ ತಪ್ಪೆ. ಅದಕ್ಕೆ ಮುತ್ತಿದ ಸಗಣಿಯನ್ನು ತಿಂದು ಬದುಕುವ ಸಗಣಿ ಹುಳುಗಳು. ಆ ದೊಡ್ಡ ತಪ್ಪೆಯನ್ನು ಸಣ್ಣ ಸಣ್ಣ ಗೋಲಿಯಾಕಾರದ ಉಂಡೆಗಳನ್ನು ಮಾಡಿ ಉರುಳಿಸಿ ಕೊಂಡು ಎಲ್ಲಿಗೋ ಕೊಂಡೊಯ್ಯುತ್ತಿರುವುದನ್ನು ನೀವು ಕಂಡಿರುತ್ತೀರಿ . ತಮ್ಮ ಕಾಲುಗಳನ್ನೇ ಬಳಸಿ ಅವು ಸಗಣಿಯನ್ನು ಉಂಡೆಕಟ್ಟುವ ಕಲೆಯಂತೂ ಅದ್ಭುತ.

ಈ ಸಗಣಿ ಹುಳುಗಳು ಡೈನೋಸಾರ್ ಕಾಲದಿಂದಲೂ ಡೈನೋಸಾರ್ ಗಳು ಹಾಕುತ್ತಿದ್ದ ಟನ್ ಗಟ್ಟಲೆ ತಪ್ಪೆಗಳನ್ನೂ ಉಂಡೆ ಕಟ್ಟುತ್ತಾ ಅವನತಿ ಹೊಂದದೆ ಬದುಕಿ ಬಂದಿವೆ.

ಆಗಸದಲ್ಲಿ ಕಾಣುವ ನಕ್ಷತ್ರಗಳನ್ನು ನೋಡಿಕೊಂಡು ಮನುಷ್ಯರಾದ ನಾವು ಸಮುದ್ರವನ್ನು , ಮರುಭೂಮಿಗಳನ್ನು ದಾಟುವುದನ್ನು ಕಲಿತಿದ್ದೇವೆ. ಹಾಗೆಯೇ ಹಕ್ಕಿಗಳು ಖಂಡಗಳಿಂದ ಖಂಡಗಳಿಗೆ ಸಾವಿರಾರು ಕಿಲೋಮೀಟರ್ ವಲಸೆ ಹೋಗುತ್ತವೆ ಎಂದು ನಮಗೆ ಗೊತ್ತು. ಈ ರೀತಿ ನಕ್ಷತ್ರಗಳನ್ನು ದಾರಿದೀಪಗಳಂತೆ ಬಳಸುವ ಕೀಟಗಳಲ್ಲಿ ನಮಗೆ ತಿಳಿದಂತೆ ಈ ಸಗಣಿ ಹುಳುಗಳೇ ಮೊದಲನೆಯವು.

ಸಗಣಿಯಲ್ಲಿರುವ ಇಂತಹ ಕ್ಷುದ್ರ ಜೀವಿಗಳು, ಗೊಬ್ಬರದ ಉಂಡೆಗಳನ್ನು ತಮ್ಮ ಗೂಡುಗಳತ್ತ ಸಾಗಿಸಲು, ಆಗಸದಲ್ಲಿ ಕಾಣುವ ಹಾಲುಹಾದಿಯನ್ನು ದಿಕ್ಸೂಚಿಯಂತೆ ಬಳಸುತ್ತವೆ ಎಂದು ವಿಜ್ಞಾನಿಗಳು ಈಗ ಕಂಡು ಹಿಡಿದಿದ್ದಾರೆ.

ವಿಜ್ಞಾನಿಗಳು ಕೂಡ ಈ ಸಗಣಿ ಹುಳುಗಳು ರಾತ್ರಿವೇಳೆ ಚಂದ್ರನನ್ನು, ಹಗಲಿನಲ್ಲಿ ಸೂರ್ಯನನ್ನು ನೋಡಿಕೊಂಡು ತಮ್ಮ ಗೂಡಿರುವ ದಿಕ್ಕನ್ನು ಕಂಡುಕೊಳ್ಳುತ್ತವೆ ಎಂದುಕೊಂಡಿದ್ದರು. ಆದರೆ ಅವು ಚಂದ್ರನಿಲ್ಲದ ಅಮಾವಾಸ್ಯೆ ರಾತ್ರಿಯಲ್ಲಿಯೂ ತಮ್ಮ ಗೂಡಿನ ದಾರಿಯನ್ನು ನಿಕರವಾಗಿ ತಲುಪಿದ್ದನ್ನು ಕಂಡು ದಂಗುಬಡಿದು ಹೋದರು.

ಅವುಗಳನ್ನು ತಾರಾಲಯದ ಕೃತಕ ಆಕಾಶದ ಕೆಳಗೆ ಬಿಟ್ಟು ಪರೀಕ್ಷಿಸಿದರು. ವಿಜ್ಞಾನಿಗಳು ಹಾಲುಹಾದಿಯ ದಿಕ್ಕನ್ನು ಬದಲಿಸಿದಂತೆ ಸಗಣಿ ಹುಳುಗಳು ಕೂಡ ದಿಕ್ಕು ಬದಲಾಯಿಸಿ ಹಾಲುಹಾದಿಯ ನೇರಕ್ಕೆ ನಡೆಯಲಾರಂಬಿಸಿದವು. ಇದರಿಂದ ವಿಜ್ಞಾನಿಗಳು ಈ ಸಗಣಿ ಹುಳುಗಳು ಕೂಡ ಪಕ್ಷಿಗಳಂತೆ ಆಗಸದಲ್ಲಿನ ಹಾಲುಹಾದಿಯನ್ನು ದಿಕ್ಸೂಚಿಯಂತೆ ಬಳಸುತ್ತವೆ ಎಂದು ಕಂಡು ಹಿಡಿದಿದ್ದಾರೆ.







# ನಾ

ಎನ್ನ ಹೊನ್ನೆನ್ನುವರು ಹಲವರು
ನಾ ಹಾಳಾದೆ ಎನ್ನುವರು ಕೆಲವರು
ನಾನೇನಾದರೇನು?

ಬಾಯಾರಿದೆ ಬಿಸಿಲಲಿ
ಒಂದನಿ ನೀರಿಲ್ಲ.
ತಂಪಾಗುವೆ ಎನ್ನುವಾಗ
ಏನಾಗುವುದೋ ತಿಳಿದಿಲ್ಲ.

ತಂಪಾದರೂ ಜಾಸ್ತಿಯಿಲ್ಲ
ಮರುಗಳಿಗೆಗೆ ಹಸಿವಿದೆ
ಒಡಲಾಗ್ನಿಯ ನೀಗಿಸುವ
ಹಸಿರು ಉಳಿದಿಲ್ಲ ನನ್ನಲಿ

ಬರಡಾಗುತಿದೆ ಕಣ ಕಣ
ಬಿಸಿಯೇರುತ್ತಿದೆ ಕ್ಷಣ ಕ್ಷಣ
ಅಭಿವೃದ್ಧಿಯ ಮಹಿಮೆಯೋ
ವಿನಾಶದೆಡೆಗೆ ಪಯಣವೋ?

ಗೊತ್ತಿಲ್ಲವೇ ನಾನು
ಮರೆತೋದೇಯ ನೀನು
ನಿನ್ನುಸಿರಿನ  ಉಸಿರು
ಇಳೆ ನನ್ನಯ ಹೆಸರು .

- ಶೃತಿ. ಎಂ